ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಗುರುವಾರ, ದಿನಾಂಕ : 24 ನೇ ಸೆಪ್ಟೆಂಬರ್, 2020

ಬನ್ನಹಳ್ಳಿ ಹುಂಡಿ ಏತ ನೀರಾವರಿ ಯೋಜನೆಯ ದುರಸ್ಥಿ ಕಾರ್ಯ

ಶ್ರೀ ಎಸ್. ನಾಗರಾಜು(ಸಂದೇಶ್‌ನಾಗರಾಜು)(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) –

589 (583) ಮಾನ್ಯ ಜಲಸಂಪನ್ಮೂಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ನಂಜನಗೂಡು ತಾಲ್ಲೂಕು ತಾಯೂರು ಸಮೀಪದ ಬನ್ನಹಳ್ಳಿ ಹುಂಡಿ ಏತ ನೀರಾವರಿ ಯೋಜನೆಯ ಅಚ್ಚುಕಟು ಪ್ರದೇಶ ಎಷ್ಟು; (ವಿವರ ಒದಗಿಸುವುದು) ಈ ಯೋಜನೆಯು ಕಳೆದ ಐದಾರು ವರ್ಷಗಳಿಂದ ತಾಂತ್ರಿಕ ದೋಷದಿಂದ ಕೂಡಿದ್ದು, ನಾಲೆಗಳಿಗೆ ನೀರು ಹರಿಯದೇ ಅಚ್ಚುಕಟ್ಟುದಾರರು ಸಂಕಷ್ಟಕ್ಕೀಡಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈಚೆಗೆ ಈ ಬಗ್ಗೆ ಅಚ್ಚುಕಟ್ಟುದಾರರು ಪ್ರತಿಭಟನೆ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಈ ಯೋಜನೆಯ ತಾಂತ್ರಿಕ ದೋಷಗಳನ್ನು ಪರಿಹರಿಸಿ, ನಾಲೆಗಳಿಗೆ ನೀರು ಬಿಡುಗಡೆ ಮಾಡಿ ರೈತರ ನೆರವಿಗೆ ಬರಲು ಕ್ರಮ ಜರುಗಿಸಲಾಗುವುದೇ?